# ಕಾನನ

ಫೆಬ್ರವರಿ ೨೦೧೮

ನಿಸರ್ಗದೆಡೆಗೆ ಪಯಣ



BANNERUGHATTA

WILDLIFE
CONSERVATION
GROUP

# ಕಾನನ

ನಿಸರ್ಗದೆಡೆಗೆ ಪಯಣ


**ಸಂಪಾದಕೀಯ**

ಅಶ್ವಥ ಕೆ.ಎಸ್

**ಲೇಖನ ವೃಂದ**

ಸ್ವಾಮಿ ಸೌಖ್ಯಾನಂದಜೀ ಮಹಾರಾಜ್

ಅಶ್ವಥ ಕೆ.ಎಸ್

ಶಂಕರಪ್ಪ ಕೆ.ಪಿ

ಮಹದೇವ ಕೆ.ಸಿ

ರಾಕೇಶ್ ಆರ್.ವಿ

ಸುಬ್ಬು ಬಾದಲ್

**ಕರಡು ತಿದ್ದುಪಡಿ**

ಮುರಳಿ ಎಸ್

**ವಿನ್ಯಾಸ**

ಮಹದೇವ ಕೆ.ಸಿ

**ಛಾಯಾಚಿತ್ರ**

ಮುರಳಿ ಎಸ್

ಸುಬ್ಬು ಬಾದಲ್

**ಇ-ವಿಳಾಸ**

kaanana.mag@gmail.com

www.issuu.com/kaanana

**ಮುಖಪುಟ**

ತಾವರೆ ಹೂ

WILDLIFE CONSERVATION GROUP

# ಸಂಪಾದಕೀಯ

21ನೇ ಶತಮಾನಕ್ಕೆ ಭೂಮಂಡಲದ ತುಂಬೆಲ್ಲಾ ತುಂಬಿ ತುಳುಕುತ್ತಿರುವ ಜನಸಂಖ್ಯೆ, ನಮ್ಮ ದಿನನಿತ್ಯದ ಬಳಕೆಗಾಗಿ ಕೇವಲ ಅಂತರ್ಜಲವನ್ನು ಮಾತ್ರ ಅವಲಂಭಿಸಿದ್ದೇವೆ. ಭೂತಾಯಿಯ ಒಡಲಿಗೆ ಕೈ ಹಾಕಿರುವ ನಾವು, ಅಂತರ್ಜಲವನ್ನು  ಬರಿದಾಗಿಸಿದ್ದೇವೆ. ಸಾವಿರ ಅಡಿಗಳಿಗೆ ಕೊಳವೆ ಬಾವಿ ತೋಡಿದರೂ ಒಂದು ಹನಿ ನೀರು ಸಿಗದಿರುವ ಪರಿಸ್ಥಿತಿಗೆ ಬಂದು ತಲುಪಿರುವುದು ಮುಂದೊಂದು ದಿನ ನೀರಿಲ್ಲದೆ ಪರದಾಡುವ ಸ್ಥಿತಿ ಬರುವ ಮುನ್ನೆಚ್ಚರಿಕೆಯೇ ಸರಿ. ವರ್ಷದಲ್ಲಿ ಪ್ರಪಂಚದಾದ್ಯಂತ ಸರಾಸರಿ ಮಳೆಯಾದರೂ ಅಂತರ್ಜಲ ಹೆಚ್ಚಾಗುತ್ತಿಲ್ಲ, ಕಾರಣ ನೀರಿನ ಇಂಗುವಿಕೆಗೆ ಪೂರಕವಾಗದಂತೆ ನೆಲಕ್ಕೆಲ್ಲ ಕಾಂಕ್ರೀಟ್,ಟಾರ್  ಎಂಬ ಪರದೆಯನ್ನು ಹಾಕಿ ಹಾಳು ಮಾಡಿದ್ದೇವೆ. ಇದರಿಂದ ಜೌಗು ನೆಲಗಳು ಇಂದು ಅವನತಿಯ ಹಾದಿ ಇಡಿದಿವೆ. ಅಂತರ್ಜಲ ಹೆಚ್ಚಿಸುವಲ್ಲಿ ಜೌಗು ನೆಲಗಳು ಪ್ರಮುಖ ಪಾತ್ರವನ್ನು ವಹಿಸುತ್ತವೆ.

ನೀರು ಮತ್ತು ನೆಲ ಎರಡನ್ನೂ  ಹೊಂದಿರುವ  ಈ ಜೌಗು ಪ್ರದೇಶಗಳು ಜೀವ ವೈವಿಧ್ಯತೆಯ ಆಗರವೇ ಸರಿ. ಇಂತಹ ಪ್ರದೇಶಗಳು ತುಚ್ಛ ಮನಸುಳ್ಳ ನಮ್ಮಿಂದ  ನಾಶವಾಗುತ್ತಿದೆ. ಇದರಿಂದಲೇ ಇಂದು ಅಂತರ್ಜಲ ಸಾವಿರಾರು ಅಡಿಗಳಿಗೆ ದಾಟಿ ಹೋಗಿದೆ. ಇಂತಹ ಜೌಗು ಪ್ರದೇಶಗಳನ್ನು ಉಳಿಸಲೆಂದೇ 1971ರಲ್ಲಿ ವಿಶ್ವಸಂಸ್ಥೆಯ ನೇತೃತ್ವದಲ್ಲಿ ಇರಾನಿನ **"ರಾಮ್ ಸಾರ್"** ಎಂಬಲ್ಲಿ ಜಾಗತಿಕ ಒಪ್ಪಂದಕ್ಕೆ ಇದುವರೆಗೂ 160 ದೇಶಗಳು ಸಹಿಹಾಕಿವೆ. ಇಂತಹ ಜೀವ ವೈವಿಧ್ಯತೆಯ ಆಗರಗಳ ಸಂರಕ್ಷಣೆಗೆ ಹಾಗೂ ಅವುಗಳ ಮಹತ್ವವನ್ನು ನಮ್ಮ ಯುವ ಪೀಳಿಗೆಗೆ ತಿಳಿಸಲೆಂದೇ, ಫೆಬ್ರವರಿ 2 ರಂದು **"ವಿಶ್ವ ಜೌಗು ಭೂದಿನ "** ಎಂದು ಆಚರಿಸಲಾಗುತ್ತದೆ.

ಅಭಿವೃದ್ಧಿ ಎಂಬ ಹೆಸರಿನಲ್ಲಿ ಸಾವಿರಾರು ಕೆರೆ-ಕುಂಟೆ, ನದಿ, ಸರೋವರಗಳಂತಹ ಜೌಗು ಪ್ರದೇಶಗಳನ್ನು ಇಂದು ನಾವು ಕೊಚ್ಚೆ ನೀರು, ಕಾರ್ಖಾನೆ ತ್ಯಾಜ್ಯಗಳನ್ನು ಸೇರಿಸಿ ಹಾಳುಮಾಡುತ್ತಿದ್ದೇವೆ. ಇನ್ನೂ ಬೆಂಗಳೂರಿನಂತಹ ನಗರಗಳಲ್ಲಿ ಇಂತಹ ಜೌಗುನೆಲಗಳು ದೊಡ್ಡ ದೊಡ್ಡ ಬಡಾವಣೆಗಳಾಗಿರುವ ಉದಾಹರಣೆಗಳು  ಬೇಕಾದಷ್ಟು!, ಹೀಗೆ ನಾನಾ ಕಾರಣಗಳಿಂದ ಜೌಗು ಪ್ರದೇಶಗಳು ಕಣ್ಮರೆಯಾಗುತ್ತಿವೆ. ಜೌಗು ಪ್ರದೇಶಗಳನ್ನು ಉಳಿಸಲಾಗದಷ್ಟು ಹಾಳು ಮಾಡಿದ್ದೇವೆ ನಾವು, ಇದು ಅಪಾಯದ ಕರೆಗಂಟೆ!, ಈಗಲಾದರೂ ಎಚ್ಚೆತ್ತುಕೊಂಡು ನಮ್ಮ ಸುತ್ತಲಿನ ಅಂತರ್ಜಲದ ಮಟ್ಟವನ್ನು ಹೆಚ್ಚಿಸಲು ಕೈ ಜೋಡಿಸೋಣ.

**ಅರಣ್ಯ, ವನ್ಯಜೀವಿ, ಪರಿಸರ ಸಂರಕ್ಷಣೆ, ವಿಜ್ಞಾನ, ವನ್ಯಜೀವಿ ಛಾಯಾಚಿತ್ರ, ಕವನ, ಕಥೆಗಳು ಹಾಗೂ ಲೇಖನಗಳನ್ನು ತಾವೂ ಕಾನನಕ್ಕೆ ಬರೆಯಬಹುದು.**

ಇ-ಅಂಚೆ :    kaanana.mag@gmail.com

**Wildlife Conservation Group**



# ಆಧ್ಯಾತ್ಮದಲ್ಲಿ ವನ್ಯಜೀವಿಗಳು

## ಶ್ರೀ ರಾಮಕೃಷ್ಣರ ಉಪದೇಶಗಳಲ್ಲಿ ಪ್ರಾಣಿಪಕ್ಷಿಗಳು

### * ನಾನು ಸಮುದ್ರವನ್ನೆ ಖಾಲಿಮಾಡುತ್ತೇನೆ !




ನಾವು ಜೀವನದಲ್ಲಿ ಏನಾದರೂ ಸಾಧಿಸಬೇಕಾದರೆ ನಮಗೆ ಪ್ರಬಲವಾದ ಇಚ್ಛಾಶಕ್ತಿ ಇರಬೇಕಾಗುತ್ತದೆ, ಅಪಾರವಾದ ಮನಃಶಕ್ತಿ ಇರಬೇಕಾಗುತ್ತದೆ, ಆಗಲೆ ನಾವು ಜೀವನದಲ್ಲಿ ಒಂದು ಯಶಸ್ಸನ್ನು ಕಾಣಬಹುದು.ಅದಕೊಂದು ಸುಂದರವಾದ ಕತೆಯನ್ನು ನಮ್ಮ ಉಪನಿಷತ್ತಿನಲ್ಲಿ ಹೇಳಲಾಗುತ್ತದೆ. ಟಿಟ್ಟಿಭ ಎಂಬ ಪಕ್ಷಿಯ ಉದಾಹರಣೆ ಮೂಲಕ ಹೇಳಿದ್ದಾರೆ.

ಟಿಟ್ಟಿಭ ಒಂದು ಚಿಕ್ಕ ಪಕ್ಷಿ ಗುಬ್ಬಚ್ಚಿಯಷ್ಟು ಇರಬಹುದು. ಅದು ಸಮುದ್ರದ ನೀರನ್ನು ತನ್ನ ಕೊಕ್ಕಿನಿಂದ ತೆಗೆದು ಇನ್ನೊಂದು ಕಡೆ ಸಾಗಿಸುತ್ತಿತ್ತು. ನಾರದರು ಒಂದು ದಿನ ಆ ದಾರಿಯಲ್ಲಿ ಹೋಗುತ್ತಾ ನೋಡುತ್ತಾರೆ, ಈ ಚಿಕ್ಕ ಟಿಟ್ಟಿಭ ತನ್ನ ಕೊಕ್ಕಿನಿಂದ ಸಮುದ್ರದ ನೀರನ್ನು ತೆಗೆದುಕೊಂಡು ಹೋಗಿ ಅಷ್ಟುದೂರದಲ್ಲಿ ಹಾಕಿ ಬರುತ್ತಿತ್ತು. ಅದನ್ನು ನೋಡಿದ ನಾರದರು ಆ ಟಿಟ್ಟಿಭವನ್ನು ಕೇಳಿದರು. ಏ. . . ಟಿಟ್ಟಿಭ ಏನು ಮಾಡುತ್ತಿದಿಯಾ? ಅದಕ್ಕೆ ಟಿಟ್ಟಿಭ ಹೇಳಿತು. ನೋಡಿ, ©©©ನಾನು ಇಡುವ ಮೊಟ್ಟೆಯನ್ನೆಲ್ಲ ಈ ಸಮುದ್ರದ ಅಲೆಗಳು ತೆಗೆದುಕೊಂಡು ಹೋಗುತ್ತವೆ.

ಪ್ರತಿಬಾರಿ ಇದೇ ರೀತಿ ನಡೆಯುತ್ತದೆ ಆದ್ದರಿಂದ ಈ ಸಮುದ್ರವನ್ನು ಖಾಲಿ ಮಾಡಬೇಕೆಂದು ಸಮುದ್ರ ನೀರನ್ನು ಬೇರೆ ಕಡೆ ಹಾಕಿಬರುತ್ತಿದ್ದೇನೆ ಎಂದಿತು. ಅದರ ಮಾತನ್ನ ಕೇಳಿ ನಕ್ಕ ನಾರದರು. ಎಲೆ ಟಿಟ್ಟಿಭ ನೀನಾದರು ಒಂದು ಚಿಕ್ಕ ಪಕ್ಷಿ, ಈ ಸಮುದ್ರವಾದರೋ ಎಷ್ಟು ದೊಡ್ಡದು ! ಈ ಸಮುದ್ರದ ನೀರನ್ನು ಖಾಲಿಮಾಡುವೆನೆಂದು ಹೊರಟಿರುವೆಯಲ್ಲಾ!, ನಿನಗೆ ನಿಜಕ್ಕೂ ಹುಚ್ಚು ಹಿಡಿದಿರಬೇಕು. ಸಮುದ್ರವೇನು ? ಒಂದು ಬೊಗಸೆಯಷ್ಟಿದೆಯೇ ಎಂದು ಹೇಳಿ, ಇಂತಹ ಹುಚ್ಚು ಸಾಹಸವನ್ನು ಕೈಬಿಡೆಂದು ನಾರದರು ಹೇಳಿದರು.

ಆ ಟಿಟ್ಟಿಭ ಹೇಳಿತು ಎಲೈ ಪೂಜ್ಯರೆ; ನನ್ನ ಗಾತ್ರ ಚಿಕ್ಕಾದಿರಬಹುದು, ನನ್ನ ಆತ್ಮ ಅನಂತವಾದುದು, ನನ್ನ ಜೀವನ ಆನಂತವಾದುದು, ನಾನು ನನ್ನ ಕಾಯಕವನ್ನು ಸಾಧಿಸಲು ನೂರು ಸಲ ಹುಟ್ಟಿಬರಬಲ್ಲೆ, ಆದರೆ ಸಮುದ್ರ ಹುಟ್ಟದಿರಬಹುದು ಅದು ಶಾಂತವಾದುದು ಅಂತ್ಯವುಳ್ಳದ್ದು ಆದ್ದರಿಂದ ನಾನು ನನ್ನ ಕೆಲಸವನ್ನು ಮಾಡಿಯೇ ತೀರುತ್ತೇನೆಂದು ಆತ್ಮವಿಶ್ವಾಸದಿಂದ ಹೇಳಿತು. ಆದ್ದರಿಂದ ವಿವೇಕಾನಂದರು ಹೇಳುತ್ತಿದ್ದರು ನಮ್ಮಲ್ಲಿ ಅನಂತವಾದ ಶಕ್ತಿಯಿದೆಯೆಂದು. ನಾವು ಏನನ್ನಾದರು ಸಾಧಿಸಬಹುದು, ಎಲ್ಲವನ್ನು ಸಾಧಿಸಬಹುದು ಎಂದು ಹೇಳುತ್ತಿದ್ದರು.

- ಸ್ವಾಮಿ ಸೌಖ್ಯಾನಂದಜೀ ಮಹಾರಾಜ್





# ಹಕ್ಕಿಲೋಕ

* ಆಲ್ಟ್ರಮರೀನ್ ಫ್ಲೈ ಕ್ಯಾಚರ್

**ಇಂಗ್ಲೀಷ್ ಹೆಸರು : Ultramarine Flycatcher**

**ವೈಜ್ಞಾನಿಕ ಹೆಸರು : *Ficedula superciliaris***

ಒಂದು ದಿನ ಸಂಜೆ ನಾನು ಸುಬ್ಬು ಹಾಗೆ ಸಂಜೆಯ ವಾಕಿಂಗ್ ಹೊರಟ್ಟಿದೆವು, ಪಶ್ಚಿಮದಲ್ಲಿ ದಟ್ಟಕಾಡು ಮರಗಳ ಹಿಂದೆ ಸೂರ್ಯ ಮಾಯಾವಾಗುತ್ತಿದ್ದ, ಆಕಾಶವೆಲ್ಲ ಕೆಂಪಗಾಗಿ ಮೋಡಗಳ ಅಂಚುಗಳೆಲ್ಲ ಚಿನ್ನದ ನೀರಿನಲ್ಲಿ ಅದ್ದಿ ತೆಗೆದಂತೆ ಫಳಫಳ ಹೊಳೆಯುತ್ತದ್ದವು, ಇನೇನು ಅರ್ದ ಮುಕ್ಕಾಲು ಗಂಟೆಯಲ್ಲಿ ಕತ್ತಲಾಗುವ ಸಮಯ ತುಂಬ ಹತ್ತಿರವಾಗುತ್ತಿತ್ತು. ಸುಬ್ಬು "ಮೊನ್ನೆ ನಾಗೇಶರವರ ಮನೆಯ ಹತ್ತಿರ ನೋಡಿದ ಸೂರ್ಯಾಸ್ತ ತುಂಬ ಚೆನ್ನಾಗಿತ್ತು. ನಾನು ಆ ಭಟ್ಕಳದ ಸಮುದ್ರ ತೀರದಲ್ಲಿ ಕುಳಿತು ಇಂತಹ ಸೂರ್ಯಾಸ್ತವನ್ನು ನೋಡಿರಲ್ಲಿಲ್ಲ ಬಿಡು ಮಾರಾಯ" ಎಂದು ತನ್ನ ಹುಟ್ಟೂರನ್ನು ನೆನಪಿಸಿಕೊಂಡು ಮಾತನಾಡುತ್ತಾ ಬರುತ್ತಿದ್ದ. "ಕತ್ತಲಾಗುವ ಸಮಯ ಬಂತು ಅದಕ್ಕೆ ಹಕ್ಕಿಗಳೇನು ಕಾಣಿಸುತ್ತಿಲ್ಲ ಎಲ್ಲಾ ತಮ್ಮತಮ್ಮ ಗೂಡುಗಳಿಗೆ ಸೇರಿಕೊಂಡವೋ ಏನೋ ತುಂಬ ಕಡಿಮೆ ಇದ್ದಂತೆ ಕಾಣುತ್ತೆ" ಎಂದು ಮುನ್ನೆಡೆಯುತ್ತಿದ್ದೆ .

ಎದುರಿಗಿದ್ದ ಬಾದಾಮಿ ಮರದ ಕೊಂಬೆಗಳ ಮೇಲೆ ಸಣ್ಣ ಸಣ್ಣ ಎರಡು ಹಕ್ಕಿಗಳು ಕೊಂಬೆಯಿಂದ ಕೊಂಬೆಗೆ ಜಿಗಿಯುತ್ತಾ ಸರಸ-ಸಲ್ಲಾಪದಲ್ಲಿ ತೊಡಗಿದ್ದವು, ನೋಡಲು ಸೂರಕ್ಕಿ (ಸನ್ ಬರ್ಡ್ ) ನೇ ಹೋಲುತ್ತಿದ್ದವು. ಸುಬ್ಬು "ಏ. . . ಅದು ಸನ್ ಬರ್ಡ್ " ಎಂದು ವಾದ ಮಾಡುತ್ತಾ ಮುಂದೆ ಹೋಗುತ್ತಿದ್ದ. ಸುಬ್ಬುವನ್ನು ಕರೆದು "ಸರಿಯಾಗಿ ಗಮನಿಸು ಮಾರಾಯ ಅದು ಸನ್ ಬರ್ಡ್ ಅಲ್ಲ" ಎಂದೆ. ಒಂದು ಕ್ಷಣ ಅಲ್ಲಿಯೇ ನಿಂತು ವೀಕ್ಷಣೆಯಲ್ಲಿ ತೊಡಗಿದೆವು. ಅವು ನನ್ನ ಹದಿನೈದು ವರ್ಷದ ಪಕ್ಷಿವೀಕ್ಷಣೆಯಲ್ಲಿ ಅದೇ ಮೊದಲ ಬಾರಿಗೆ ನೋಡಿದ್ದು. ಈ ಹಕ್ಕಿಗಳ ಹಿಂದೆ ಚೆನ್ನದಂತ ತಿಳಿ ಮೋಡಗಳಿದ್ದುದರಿಂದ ಈ ಹಕ್ಕಿಗಳ ಬಣ್ಣ ಕಂಡುಹಿಡಿಯಲು ಆಗದಿದ್ದರೂ ಕಪ್ಪು ಬಣ್ಣದಂತೆ ಕಾಣಿಸಿತು. ನಮಗೆ ಹತ್ತಿರದಲ್ಲೇ ಕಾಣಿಸಿದರಿಂದ ಅದರ ಹೊಟ್ಟೆ ಮತ್ತು ಎದೆಯ ಭಾಗದಲ್ಲಿ, ಬಿಳಿಯ ಬಣ್ಣ ಎದ್ದುಕಾಣುತ್ತಿತ್ತು. ಆದರೆ ಎದೆಯ ಭಾಗದಲ್ಲಿ ಬಳೆಗಾರನು ತನ್ನ ಹೆಗಲಿಗೆ ಬಳೆಗಳ ಜೋಳಿಗೆಯನ್ನು ನೇತುಹಾಕಿಕೊಂಡಂತಿತ್ತು.ಭುಜದ ಎರಡೂ ಕಡೆ ಜೋಳಿಗೆಯನ್ನು ನೇತು ಹಾಕಿಕೊಂಡಂತೆ ಕಪ್ಪನೆಯ ಮಚ್ಚೆಗಳು ಎದ್ದು ಕಾಣುತ್ತಿತ್ತು. ತುಂಬ ಚೆನ್ನಾಗಿ ಅಥವಾ ಬೈನಾಕ್ಯೂಲರ್ ನಲ್ಲಿ ಏನಾದರೂ ನೋಡಿದ್ದರೆ ಆ ನೀಲಿ ಬಣ್ಣ ಸರಿಯಾಗಿ ತಿಳಿಯುತ್ತದೆ, ಕಣ್ಣುಬ್ಬಿನ ಮೇಲೆ ಬಿಳಿಯ ಗೆರೆ ಎದ್ದು ಕಾಣುತ್ತಿತ್ತು.



"ಸುಬ್ಬು ಇಲ್ಲೇ ನೋಡಿಕೋ ಓಡಿಹೋಗಿ ಕ್ಯಾಮರಾ ತರುತ್ತೇನೆ " ಎಂದು ಪಕ್ಕದಲ್ಲೇ ಇದ್ದ ರೂಮಿಗೆ ಓಡಿ ಹೋಗಿ ಕ್ಯಾಮರಾ ತೆಗೆದುಕೊಂಡು ಜೊತೆಯಲ್ಲಿ ಮುರಳಿಯನ್ನು ಕರೆದುಕೊಂಡು ಬಂದೆ. ನಾವು ಬರುವುದರಲ್ಲಿ ಸುಬ್ಬು ತನ್ನ ಕೈಯನ್ನು ಯಾವುದೋ ದಿಕ್ಕಿಗೆ ತೋರಿಸಿ ಈ ಕಡೆ ಹಾರಿಹೋದವು ಎಂದು ಸಪ್ಪೆ ಮುಖಮಾಡಿಕೊಂಡ " ಏ. . . ಯಾವ್ ಕಡೆ ಸರಿಯಾಗಿ ಹೇಳು, ಹೋಗಿ ಹುಡುಕೋಣ" ಎಂದು ಕೇಳಿದೆ. ಆ ಕಡೆ, ಮರಗಳ ಹಿಂದಕ್ಕೆ ಹಾರಿಹೋದ ಎಂದು ತನ್ನ ಬೆರಳನ್ನು ತೋರಿಸಿದ. ನಾನು ಆ ಮರಗಳ ಮೇಲೆಲ್ಲ ದಿಟ್ಟಿಸಿ ನೋಡತ್ತಿದೆ. ಯಾವುದೇ ಹಕ್ಕಿಗಳು ಕುಳಿತಿರುವುದು ಕಾಣಲ್ಲಿಲ್ಲ. ಸುಬ್ಬುವು ಆ ಹಕ್ಕಿಗಳ ವರ್ಣನೆಯನ್ನು ಮುರಳಿಗೆ ವಿವರಿಸುತ್ತಿದ್ದ, ಒಂದು ಹೊಸ ಹಕ್ಕಿಯನ್ನು ನೋಡಿದ ಖುಷಿ ಸುಬ್ಬುವಿನ ಮುಖ ನೋಡಿದರೆ ಎದ್ದು ಕಾಣುತ್ತಿತ್ತು.

ಆದರೂ ಮತ್ತೆ ಹಕ್ಕಿ ಕಾಣಲ್ಲಿಲ್ಲವಲ್ಲ ಎಂಬ ಬೇಸರ ಎಲ್ಲರ ಮುಖದಲ್ಲಿ ಎದ್ದುಕಾಣುತ್ತಿತ್ತು, ಸಪ್ಪೆ ಮುಖಮಾಡಿಕೊಂಡು ಹಿಂದಕ್ಕೆ ಬಂದೆವು. ಹೋದರೆ ಹೋಗಲಿ ನೀವು ನೋಡಿದ ಹಕ್ಕಿ ಯಾವುದೆಂದು ಪುಸ್ತಕದಲಾದರೂ ಹುಡುಕಿತೋರಿಸ್ತಿರಾ?, ಮತ್ತೆ ಅದನ್ನೆನಾದರು ಮರೆತು ಬಿಟ್ಟರೆ ಕಷ್ಟ!, ಎಂದು ಬೇಗ ಬೇಗ ಬನ್ನಿ ಎಂದು ಕರೆದರು ಮುರಳಿ.

ನಾನೊಂದು, ಸುಬ್ಬುವೊಂದು ಪಕ್ಷಿಗಳ ಪುಸ್ತಕಗಳನ್ನು ಹಿಡಿದು ಕುಳಿತು ಆ ಹಕ್ಕಿಯನ್ನು ಗುರುತಿಸಲು ಎರಡು ಪುಸ್ತಕವನ್ನು ಜಾಲಾಡಿದರು ಆ ಹಕ್ಕಿಯು ಸಿಗದೆಯಿದ್ದುದ್ದಕ್ಕೆ ಎಲ್ಲರಿಗೂ ತುಂಬ ಬೇಸರವೇ ಆಯಿತು. ಆ ಕಪ್ಪು ಬಣ್ಣದ ಸನ್ ಬರ್ಡ್ ಗಾತ್ರದ ಹಕ್ಕಿ, ಎದೆಯ ಎರಡೂ ಭಾಗದಲ್ಲಿಯೂ ಇದ್ದ ಜೋಳಿಗೆಯಾಕಾರದ ಮಚ್ಚೆ, ಕಣ್ಣುಬ್ಬಿನ ಮೇಲೆ ಇರುವ ಬಿಳಿ ಗೆರೆಯಂತಿರುವ ಯಾವ ಹಕ್ಕಿ ಹೋಲುತದೆ ಎಂದು ಮತ್ತೆ ಮತ್ತೆ ಪುಸ್ತಕವನು ತಿರುಚುತ್ತಾ



ಇಲರಬೇಕಾದರೆ ನಾವು ನೋಡಿದ ಹಕ್ಕಿಯನ್ನೇ ಹೋಲುವ ಒಂದು ಹಕ್ಕಿ ಸಿಕ್ಕಿತು. ಆದರೆ ಆದರ ಬಣ್ಣ ಕಪ್ಪು ಆಗಿರಲ್ಲಿಲ್ಲ, ಬದಲಿಗೆ ಕಡು ನೀಲಿ ಬಣ್ಣವಾಗಿತ್ತು. ಇಲ್ಲ ಅದೇ ಸರಿಯಾದ ಹಕ್ಕಿ ಎಂದು ನಿರ್ಧರಿಸಿದೆವು. ಏಕೆಂದರೆ ಆ ಕಡು ನೀಲಿ ಬಣ್ಣ ಆ ಚೆನ್ನದ ನೀರಿನಲ್ಲಿ ಮುಳುಗಿಸಿ ತೆಗೆದ ತಿಳಿ ಚೆನ್ನದ ಮೋಡಗಳು ಆ ಹಕ್ಕಿಯ ಬ್ಯಾಗ್ರೌಂಡ್ ಸರಿ ಇಲ್ಲದೇ ಇದ್ದುದರಿಂದ ಕಡುನೀಲಿ ಬಣ್ಣ ನಮಗೆ ಕಪ್ಪಾಗಿಯೇ ಕಂಡದ್ದು.

ಇದು ಆಲ್ಟ್ರಮರಿನ್ ಫ್ಲೈಕ್ಯಾಚರ್ "Ultramarine Flycatcher" ಎಂದು ತಿಳಿಯಿತು. ಈ ಹಕ್ಕಿಯು ಸಾಮಾನ್ಯವಾಗಿ ಈಶಾನ್ಯ ರಾಜ್ಯಗಳಲ್ಲಿ ಕಂಡು ಬರುವ ಹಕ್ಕಿ, ಬೇಸಿಗೆಯಲ್ಲಿ ಹಿಮಾಲಯ ಪರ್ವತ ಗಳಲ್ಲಿ ಕಂಡು ಬರುತ್ತವೆ. ಚಳಿಗಾಲದಲ್ಲಿ ದಕ್ಷಿಣ ಭಾರತದ ಕೆಲ ಪ್ರದೇಶಗಳಲ್ಲಿ ಕಂಡು ಬರುತ್ತವೆ ಎಂದು A Field Guide to the Birds of India ಎಂಬ ಪುಸ್ತಕ ನೋಡಿದಾಗ ತಿಳಿದು ಬಂದಿದ್ದು.

- ಅಶ್ವಥ ಕೆ.ಎನ್

# ಕಾನನ ಬಂಧ




**ಎಡದಿಂದ ಬಲಕ್ಕೆ**

1. ಈ ಹಕ್ಕಿಯ ಹೆಸರಲ್ಲಿ ಮಂಗನೊಬ್ಬ ಅಡಗಿದ್ದಾನೆ (3)

3. ಮೈಯೆಲ್ಲಾ ಚಿಟ್ಟೆ ಇರುವ ಈ ಪ್ರಾಣಿ ಚಿರಾಯುವೇನಲ್ಲ (3)

5. ಕಾಡಿನಲ್ಲಿರುವ ಕರಿ ಕೂದಲಿನ ಪ್ರಾಣಿ (3)

7. ಕಾಡು, ಮೇಡು, ಬೆಟ್ಟ ಹತ್ತುವ ಹವ್ಯಾಸ (3)

9. ಇದು ನಮ್ಮದೇ ಪತ್ರಿಕೆ (3)

11. ಇಲ್ಲಿ ಹಾರವೂ ಇದೆ ಪಕ್ಷಿಯೂ ಇದೆ, ಆದರೆ ಈ ಎರಡೂ ಅಲ್ಲ (4)

13. ಇಲ್ಲಿಯ ಜನರು ಬಂಡಿಗಳನ್ನು ಬಳಸುತ್ತಿದ್ದರಂತೆ (4)

14. ಈ ಗೋಸುಂಬೆ ನಿಜವಾಗಿಯೂ ಹಾರುವುದೋ ? (5)

16. ಇಲ್ಲೊಂದು ಮಿಕವಿದೆ ಆದರೆ ಮೊದಲನೆಯದು (4)

17. ಈ ಹಾವು ಒಮ್ಮೊಮ್ಮೆ ನಗರಕ್ಕೂ ಬರುವುದುಂಟು (5)

**ಮೇಲಿನಿಂದ ಕೆಳಕ್ಕೆ**

1. ಕರ್ನಾಟಕ ಕರಾವಳಿ ತೀರದ ಸುಂದರ ನಗರ (4)

2. ಕಪ್ಪು ಪಾತರಗಿತ್ತಿಯೊಂದು ತಲೆ ಕೆಳಗಾಗಿದೆ (4)

4. ಮಿಡಿಯುವ ಹಾತೆ…(3)

6. ಚಾರಣ ಪ್ರಿಯರಿಗೊಂದು ಅದ್ಭುತ ತಾಣ ಹಾಗೂ ಪರ್ವತಗಳ ಸಾಲು ಮಲೆನಾಡಿನಲ್ಲಿದೆ. ಆದರೆ ಇಲ್ಲಿ ತಲೆ ಕೆಳಗಾಗಿದೆ (3)

8. ರಣಾಂಗಣದ ಈ ಪಕ್ಷಿ ಸುಂದರವಾದುದು (4)

9. ಕಾಡಿನಲ್ಲಿರುವ ಈ ಪ್ರಾಣಿ ಯಮನ ಸವಾರಿಯೂ ಹೌದು (4)

10. ಅತಿ ಚಾಲಾಕಿ ಹಾಗೂ ಕುತಂತ್ರಿ ಬುದ್ಧಿಯ ಜೀವಿ (2)

12. ತಂಬೂರಿ ದಾಸಯ್ಯನೊಬ್ಬ ಈ ಹಾವನ್ನು ಆಡಿಸುವುದನ್ನು ನೋಡಬಹುದು (5)

15. ಇದು ಕಾಡು ಪ್ರಾಣಿ (4)

17. ಈ ಕಾಡಿನ ಹೊಳೆಯಲ್ಲಿ ನಾಗರೀಕತೆಯೂ ಇದ್ದಿರಬಹುದೇ? (5)

- ಸುಬ್ಬು ಬಾದಲ್






## ❖ ಎವರೆಸ್ಟ್ ಗಿಂತ ಎತ್ತರಕ್ಕೆ ಹಾರಬಲ್ಲ ದುಂಬಿ.

ಆಲ್ ಪೈನ್ ದುಂಬಿಗಳು ಮೌಂಟ್ ಎವೆರೆಸ್ಟ್ ಗಿಂತ ಎತ್ತರದಲ್ಲಿ ಹಾರಬಲ್ಲವು ಎಂದು ವಿಜ್ಞಾನಿಗಳು ಕಂಡು ಹಿಡಿದಿದ್ದಾರೆ. ದುಂಬಿಗಳು ಹಿಮಾಲಯದ ಅತೀಶೀತ ವಾತಾವರಣದಲ್ಲಿ ಬದುಕಲಾರವು. ಆದರೂ ಕ್ಯಾಲಿಪೋರ್ನಿಯಾ ವಿಶ್ವ ವಿದ್ಯಾನಿಲಯದ ವಿಜ್ಞಾನಿಗಳು ಕಡಿಮೆ ಒತ್ತಡವಿರುವಂತೆ ಪ್ರಯೋಗದಲ್ಲಿ ಸೃಷ್ಟಿಸಿ ಅಲ್ಲಿ ದುಂಬಿಗಳ ಹಾರಾಟವನ್ನು ಅಭ್ಯಸಿಸಿ ಬಹು ಎತ್ತರದ ವಾತಾವರಣದಲ್ಲೂ ಈ ದುಂಬಿಗಳು ಹಾರಬಲ್ಲವೆಂದು ಕಂಡು ಹಿಡಿದಿದ್ದಾರೆ.

ಚೀನಾದ 10600ಅಡಿ ಎತ್ತರದಲ್ಲಿ ಹಾರುವ 6 ಆಲ್ ಪೈನ್ ದುಂಬಿಗಳನ್ನು ವಿಮಾನದ ಸಹಾಯದಿಂದ ಬಲೆ ಹಾಕಿ ಹಿಡಿಯಲಾಗಿದೆ. ಇಷ್ಟು ಎತ್ತರದಲ್ಲಿ ಹಾರುವಾಗ ಈ ದುಂಬಿಗಳು ತಮ್ಮ ರೆಕ್ಕೆ ಗಳನ್ನು ಬಾಲದಿಂದ ತಲೆಯವರೆಗೂ ಹರಡಿಸಿಕೊಂಡು ರೆಕ್ಕೆ ಬಡಿಯುತ್ತವೆ. ಇದರಿಂದ ಅವು ಕಡಿಮೆ ಗಾಳಿ ಇರುವ ಎತ್ತರದ ಪ್ರದೇಶದಲ್ಲೂ ತೇಲುವಂತೆ ಸಹಕಾರಿಯಾಗಿದೆ ಎಂದಿದ್ದಾರೆ. ಅವು ಅಷ್ಟು ಎತ್ತರಕ್ಕೆ ಹಾರಲು ಕಾರಣ ಹುಡುಕುತ್ತಾ ಹೊರಟಾಗ ಹೆಚ್ಚುತ್ತಿರುವ ತಾಪಮಾನದಿಂದ ಹಲವಾರು ದುಂಬಿಯ ಪ್ರಭೇದಗಳು ಎತ್ತರದ ತಂಪಾದ ಪ್ರದೇಶಗಳಿಗೆ ವಲಸೆ ಹೋಗುತ್ತಿವೆ ಎಂದು ತಿಳಿದು ಬಂದಿದೆ.

ಈ 3666 ಮೀಟರ್ ಎತ್ತರದಲ್ಲಿ ಹಾರುವ ಆಲ್ ಪೈನ್ ದುಂಬಿಯ ರೆಕ್ಕೆಯ ಚಲನೆಯನ್ನು ವಿಡಿಯೋ ಮಾಡಿ ಅಭ್ಯಾಸಿಸಿ ಅದರ ರಚನೆ ಮತ್ತು ಚಲನೆಯ ಸಹಾಯದಿಂದ ಹಿಮಾಲಯದಲ್ಲೂ ಹಾರಬಲ್ಲ ಹೆಲಿಕ್ಯಾಪ್ಟರ್ ಗಳನ್ನು ಸಿದ್ಧಪಡಿಸಬಹುದು ಎಂಬ ಚಿಂತನೆಗಳು ನಡೆದಿವೆ.

ಕಡಿಮೆ ಆಮ್ಲಜನಕವಿರುವ ಕಡಿಮೆ ವಾಯುಭಾರವಿರುವ ವಾತಾವರಣವನ್ನು ಸೃಷ್ಟಿಸಿ ಅಲ್ಲಿ ಈ ದುಂಬಿಗಳನ್ನು ಹಾರುವಂತೆ ಮಾಡಿ ಅಭ್ಯಾಸಿಸಿ ಕಂಡುಹಿಡಿದಿದ್ದಾರೆ.

- ಶಂಕರಪ್ಪ ಕೆ.ಪಿ





# ಚಿಟ್ಟೆ ಗುರುತು

## * ಪ್ರೊಯನೀರ್ ಚಿಟ್ಟೆ

***Belenois aurota (Fabricius)***

ಫೆಬ್ರವರಿ ಬಂತೆಂದರೆ ರೈತರೆಲ್ಲಾ ಹೊಲದ ಕೆಲಸ ಮುಗಿಸಿ ಬೆಳೆದ ಪಸಲೆಲ್ಲಾ ಮನೆಗೆ ತುಂಬಿಕೊಳ್ಳುತ್ತಾರೆ. ಶಿವರಾತ್ರಿ ಮುಗಿಯಿತೆಂದರೆ ಬೇಸಿಗೆ ಕಾಲಿಟ್ಟಂತೆ ಲೆಕ್ಕ, ಈ ಬೇಸಿಗೆಯಲ್ಲಿ ನಮ್ಮ ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನದಲ್ಲಿನ ಹುಲಿಬೋನು, ದೇವಸ್ಥಾನದ ಅಗ್ಗು, ಕಾಫಿಬಂಡೆ ಕೆಳಗಿನ ಭಾಗವನ್ನ ಬಿಟ್ಟರೆ ಉಳಿದ ಕಾಡೆಲ್ಲಾ ಎಲೆಯುದುರಿ ಬೋಳಾದಂತೆ ಕಾಣುತ್ತದೆ. ಆದರೆ ಈ ಪ್ರದೇಶ ಮಾತ್ರ ಸದಾ ಹಚ್ಚ ಹಸಿರಾಗಿರುತ್ತದೆ. ಅದಲ್ಲದೇ ಈ ತಿಂಗಳಲ್ಲಿ ಮಾತ್ರ ಕಾಡಿನ ತುಂಬೆಲ್ಲ ಸುಗಂಧ ದ್ರವ್ಯ ಚೆಲ್ಲಿದಂತಾ ಸುವಾಸನೆ ಪಸರಿಸುತ್ತದೆ. ಇದಕ್ಕೆಲ್ಲ ಈ ಜಾಲಾರಿ ಮರಗಳೇ ನೇರ ಹೊಣೆ!, ಮೊನ್ನೆ ಭಾನುವಾರ ಶಿವನಹಳ್ಳಿಗೆ ಹೋಗಿ ಬರೋಣವೆಂದು ಗಾಡಿಹತ್ತಿದ ನನಗೆ ಬರೀ ಜಾಲಾರಿ ಹೂವಿನಿಂದಲೇ ಶೃಂಗರಸಿ ಮಧುಮಗಳಂತೆ ಕಂಗೊಳಿಸುತ್ತಿದ್ದ ಎರಡು ಆಟೋ ಮತ್ತೆ ನಮ್ಮ ಬಸ್ಸು ಎದುರಾದವು *"ಹೂವಿನ ನೆಪದಲ್ಲಿ ಮರಾನೆಲ್ಲ ಹಾಳ್ಮಾಡ್ತಾರೆ ಕಳ್ ನನ್ಮಕ್ಳು"* ಎಂದು ಮನಸ್ಸಿನಲ್ಲೇ ಬೈದು ಮುಂದೆ ಸಾಗಿ ಹುಲಿಬೋನ್ ಕ್ರಾಸಿನ ಬಳಿ ಗಾಡಿ ನಿಧಾನಗೊಳಿಸಿದೆ.

ಕಾಡಿನಲ್ಲಿ ನನ್ನ ಉಸಿರಾಟವೇ ನನಗೆ ಕೇಳುವಷ್ಟು ನೀರವ ಮೌನ, ಕಾಡನೆಲ್ಲಾ ಪಸರಿಸುತ್ತಿದ್ದ ಜಾಲಾರಿ ಹೂವಿನ ವಾಸನೆ ಗಾಡಿಯನ್ನ ಸೈಡಿಗೆ ನಿಲ್ಲಿಸಿ ಒಂದೆರಡು ರೆಕ್ಕೆ ಹೂ ಕಿತ್ತು ಸುವಾಸನೆಯನ್ನ ಮನೆಗೂ ಒಯ್ಯುವ ಬಯಕೆಯಿಂದ ಹಸಿರು ಮರಗಳ ನಡುವಿನ ಅರಳಿದ ಹೂವನ್ನೇ ನೋಡುತ್ತಿದ್ದೆ.

ಜೇನಿನ ನೊಣಗಳು ಮಕರಂದ ಹೀರುವ ಜಾತ್ರೆಯ ಸಂಭ್ರಮದಲ್ಲಿ ಮೈಮರೆತ್ತಿದ್ದವು. ದುಂಬಿಗಳ ಝೇಂಕಾರದ ನಿನಾದ ಕಾಡಿನಲ್ಲಿ ಪ್ರತಿಧ್ವನಿಸುತ್ತಿತ್ತು. ಆಗ ಅಲ್ಲೆ ಹತ್ತಿರದಲ್ಲಿ ಒಂದೆರಡು ಚಿಟ್ಟೆಗಳು ಮಕರಂದದ ರುಚಿ ನೋಡಲು ಬಂದವು ಅವು ನೋಡಲು ಬಿಳಿ, ಹಳದಿ, ಕಪ್ಪು ಗೆರೆಗಳಿದ್ದಂತೆ ಕಂಡಿತು. ನೋಡಿ ನಂತರ ಮನೆಗೆ ಬಂದು ಬಟ್ಟರ್ ಫ್ಲೈ ಪುಸ್ತಕದಲ್ಲಿ ನೋಡಿದಾಗಲೇ ಅದು Pioneer Butterfly ಎಂದು ತಿಳಿದಿದ್ದು.

ಹಳದಿ, ಬಿಳಿ, ಹಾಕಿಕಡ್ಡಿಯಂತಹ ಕಪ್ಪು ಗೆರೆಗಳಿಂದ ಕೂಡಿದ್ದು 40-55 ಮೀ ಮೀ ವೇಗದಲ್ಲಿ ತನ್ನ ರೆಕ್ಕೆಯನ್ನ ಬಡಿದುಕೊಳ್ಳುವ ಈ ಚಿಟ್ಟೆಗಳು ಭಾರತ, ಪಾಕಿಸ್ತಾನ, ಅಫಗಾನಿಸ್ತಾನ, ನೇಪಾಳ, ಬಾಂಗ್ಲಾದೇಶಗಳಲ್ಲಿ ಸಾಮಾನ್ಯವಾಗಿ ಕಾಣಸಿಗುತ್ತವೆ. ಕುರುಚಲು ಕಾಡು ಹಾಗೂ ಒಣ ಪ್ರದೇಶಗಳಲ್ಲಿ

ಕಾಣಸಿಗುವ ಈ ಚಿಟ್ಟೆಗಳು ಪ್ರಬಲವಾಗಿ ಹಾರಬಲ್ಲವು ಹೆಚ್ಚಾಗಿ ಹೂಗಳ ಮೇಲೆ ಹಾಗೂ ತೇವಾಂಶವಿರುವ ಪ್ರದೇಶಗಳಲ್ಲೂ ಹೆಚ್ಚಾಗಿ ನೋಡಬಹುದು.




ಗುಂಪು ಗುಂಪಾಗಿ ವರ್ಷವಿಡೀ ಇರುವ ಇವು ತನ್ನ ಮೊಟ್ಟೆಗಳನ್ನ ಗೊಂಚಲಿನಂತೆ ಇಡುತ್ತವೆ. ಹಿಮಾಲಯದ 2800 ಅಡಿ ಎತ್ತರದಲ್ಲೂ ಹಾರುವ ಸಾಮರ್ಥ್ಯವನ್ನ ಹೊಂದಿವೆ. ಇವುಗಳ ಲಿಂಗ ಬೇರೆ ಬೇರೆಯಾಗಿದ್ದು, ಮೇಲ್ಮೈ ಬಿಳಿಯ ಬಣ್ಣದಿಂದ ಕೂಡಿದ್ದು, ಹಾಕಿ ಕಡ್ಡಿಯಂತಾ ಕಪ್ಪು ರಂಧ್ರಗಳು ಎರಡೂ ಮುಂಗಾಲಿನ ರೆಕ್ಕೆಗಳು ಕೂಡಿರುತ್ತವೆ. ಗಂಡು ಚಿಟ್ಟೆಗಳ ಬಿಳಿ ಗೆರೆಯಿಂದ ಕೂಡಿದ ಕಪ್ಪು ಗುರುತುಗಳನ್ನ ಹೊಂದಿರುತ್ತವೆ. ಹಿಂಗಾಲಿನ ರೆಕ್ಕೆ ಬಿಳಿ ಬಣ್ಣದಿಂದ ಕೂಡಿದ್ದು ಕಪ್ಪು ಗೆರೆಯನ್ನ ಹೊಂದಿರುತ್ತದೆ. ಹೆಣ್ಣು ಚಿಟ್ಟೆಯೂ ಒಂದೆ ತರಹವೇ ಇದ್ದು, ಗೆರೆಗಳು ಇನ್ನೂ ದಪ್ಪದಾಗಿ ಇರುತ್ತವೆ




- ಮಹದೇವ ಕೆ ಸಿ





# ಗುಡ್ಡದ ಕಾಡಿಗೆ ನೀರು

ಆಧುನಿಕ ಜೀವನದಲ್ಲಿ ಮನುಷ್ಯ ತಾನು ಬದುಕಿರುವುದಕ್ಕೆ ಬೇಕಾದ ಅತ್ಯವಶ್ಯಕವಾದ ಮೂಲಭೂತ ವಸ್ತುಗಳನ್ನೆಲ್ಲಾ ಪ್ರಕೃತಿಯಿಂದಲೇ ಪಡೆದುಕೊಳ್ಳುತ್ತಿದ್ದಾನೆ. ಆದರೆ ಮನುಷ್ಯ ಸ್ವಾರ್ಥಜೀವಿ ತನ್ನ ಸ್ವಾರ್ಥ ಸುಖಕರ . ವೈಭೋಗದ ಜೀವನಕ್ಕಾಗಿ ನೇರವಾಗಿ ಪ್ರಕೃತಿಯನ್ನು ಬಲಿಕೊಡುತ್ತಿದ್ದಾನೆ. ತನ್ನ ಬುದ್ಧಿವಂತಿಕೆಯ ಫಲವೋ ಅಥವಾ ವಿನಾಶದ ಹಾದಿಯೋ ಭೂಮಿಯ ಮೇಲೆ ಹೆಚ್ಚೆಚ್ಚು ಜನಸಂಖ್ಯೆ ಬೆಳೆದಂತೆಲ್ಲಾ ಕಾಡುಗಳು ಅವನತಿಯನ್ನು ಕಾಣುತ್ತಿವೆ. ಆದರೂ ಕಾಡೀನ ಪ್ರಾಮುಖ್ಯತೆಯನ್ನು ಅರಿಯುವ ಶಕ್ತಿ ಮನುಷ್ಯನ ಬುದ್ಧಿವಂತಿಕೆಗೆ ಮಾತ್ರ ನಿಲುಕದ್ದು.ಅತೀ ಬುದ್ಧಿವಂತ ಚಿಂಪಾಂಜಿಯು ಇದನ್ನು ವೂಹಿಸಲೂ ಅಸಾದ್ಯಆದರೆ ಈ ಮಹತ್ವದ ಸತ್ಯವನ್ನು ಅರಿತವರು ಬೆರಳೆಣಿಕೆಯಷ್ಟಿರುವುದು ವಿಷಾದನೀಯ.

ಪ್ರಕೃತಿಯ ರಕ್ಷಣೆಯ ಸಲುವಾಗಿಯೇ ಪ್ರಪಂಚದಲ್ಲಿ ಹಲವಾರು ಸಂಘಸಂಸ್ಥೆಗಳು ಇವೆ. ಈ ಪ್ರಕೃತಿ ಸಂರಕ್ಷಣೆಯ ನಿಟ್ಟಿನಲ್ಲಿ ಕಾರ್ಯೋನ್ಮುಖರಾಗಿ ಶ್ರಮಿಸುತ್ತಿವೆ ಸಹ. ಆದರೂ ಹೆಚ್ಚುತ್ತಿರುವ ಜನಸಂಖ್ಯೆ ಪರಿಣಾಮ ಹಾಗೂ ದುರಾಸೆಯ ಜೀವಿಗಳು ಕಾಡನ್ನು ನಾಶಪಡಿಸುತ್ತಿದ್ದಾರೆ. ಇಂತಹವರಲ್ಲಿ ದೇಶವನ್ನು ಉನ್ನತಿಯೆಡೆಗೆ ನಡೆಸಬೇಕಾದ ಅನೇಕ ರಾಜಕಾರಣಿಗಳು ಸಹ ಕೈಜೋಡಿಸಿದ್ದಾರೆ ಎನ್ನುವುದು ತುಂಬಾ ಬೇಸರ , ಅಸಮದಾನ , ಕೋಪ ಸಹಜವಾಗಿದೆ.




"ಕಾನನ" ಈ ಶೀಪ್ರಿಕೆಯ ಮಾಸಪತ್ರಿಕೆ ಪ್ರತಿ ತಿಂಗಳು ಕಥೆ , ಕವನ, ವಿಜ್ಞಾನ ಆಶ್ಚರ್ಯ ಕೌತುಕ ಹಾಗೂ ಬರಹಗಾರ ಅನುಭವಗಳೊಂದಿಗೆ ಓದುಗರಿಗೆ ಖುಷಿ ತಂದಿದೆ. ಇದು ಈಗ ತನ್ನ ಮೂರು ವರ್ಷಗಳನ್ನು ಯಶಸ್ವಿಯಾಗಿ ಪೂರೈಸಿ ತನ್ನ ನಾಲ್ಕನೇ ವಸಂತಕ್ಕೆ ಕಾಲಿಟ್ಟಿದೆ . ಈ ಸಂತೋಷದ ಪ್ರಯುಕ್ತ ಪರಿಸರದ ಕಾಳಜಿಯಾಗಿ

ಶ್ರಮದಾನ ಅಥವ 'ಬೆಟ್ಟದ ಗಿಡಗಳಿಗೆ ನೀರು' ಎನ್ನುವ ಕಾರ್ಯಕ್ರಮದ ಮೂಲಕ 'ಕಾನನ' ದ ಹುಟ್ಟುಹಬ್ಬ ಆಚರಿಸಿದ್ದೇವೆ.




ಶ್ರಮದಾನ ಅಂದರೆ ಜನವರಿ ತಿಂಗಳ ಪ್ರತಿ ಭಾನುವಾರವು ನಮ್ಮೂರಿನ ಪಕ್ಕದಲ್ಲಿ ನೆಟ್ಟಿರುವ ನೂರಾರು ಜಾತಿಯ ಸಸ್ಯಗಳಿಗೆ ಈ ಬೇಸಿಗೆಯ ಸಮಯದಲ್ಲಿ ನಮ್ಮಿಂದ ನೀರೆರೆಯುವ ಕಾರ್ಯ ಇದಕ್ಕೆ ಜನರ ಸಹಾಯ ಅತ್ಯವಶ್ಯಕವಾದ್ದರಿಂದ ತಮ್ಮ ಶ್ರಮವನ್ನು ಒಂದು ಒಳ್ಳೆಯ ಕೆಲಸಕ್ಕೆ ಬಳಸಲೆಂದು 'ಕಾನನ' ತಂಡದಿಂದ ಶ್ರಮದಾನಕ್ಕೆ ಆಹ್ವಾನಿಸಿ.

ಜನರ ನಡುವೆಯೆ ಇದ್ದು ಪ್ರತಿಭಟನೆ ಆಂದೋಲನ ಅರಿವು ಕಾರ್ಯಕ್ರಮ ಮಾಡಿಸುವುದು . ಇವುಗಳೇ ಅಲ್ಲದೆ ಈ 'ಶ್ರಮದಾನ ' ದಂತಹ ಕಾರ್ಯಕ್ರಮಗಳ ಮೂಲಕ ಜನರಿಗೆ ಹಾಗೂ ಪರಿಸರ ಸ್ನೇಹಿಗಳಿಗೆ ಮಾದರಿಯಾಗುವದು . . ನಮಗೆ ತುಂಬಾ ಹೆಮ್ಮೆಪಡುವ ವಿಷಯವೇ ಸರಿ , ಏಕೆಂದರೆ ಈಗಿನ ಯುವಜನತೆಗೆ ಹಾಗೂ ಸಾಮಾನ್ಯಜನತೆಗೆ ಪರಿಸರದ ಬಗ್ಗೆ ಅರಿವು ಮೂಡಿಸುವುದೆಂದರೆ ಬರೀ ಸಮಾರಂಭ ಏರ್ಪಡಿಸುವುದು. ನಾಲ್ಕಾರು ಪ್ರೇರೇಪಿಸುವ ಮಾತನಾಡುವುದು ಇವೇ ಆಗಿಬಿಟ್ಟಿವೆ. ಆದರೆ ಈ ಶ್ರಮದಾನ ಕಾರ್ಯದ ಮೂಲಕ ನಾವೇ ನೇರವಾಗಿ ಸಸ್ಯಗಳಿಗೆ ನಿರೆರೆದು ಅವುಗಳ ಪೋಷಣೆಯಲ್ಲಿ ನಾವು ಭಾಗಿಯಾಗುವುದರಿಂದ ನಮಗೆಲ್ಲರಿಗೂ ನಿಜವಾಗಲು ಆತ್ಮತೃಪ್ತಿಯಾಗುತ್ತದೆ.ಇಂತಹ ಕಾರ್ಯಗಳ ಪ್ರಾಮುಖ್ಯತೆ ಅರಿತಿರುವ ನಾವು ನಮ್ಮ ಊರಿನ ಸುತ್ತ ನೂರಾರು ಎಕರೆಗೆ ಹಲವಾರು ವೈವಿದ್ಯಮಯ ಸಸಿಗಳ ನೆಟ್ಟು ಪೋಷಿಸಿ ಒಂದು ಕಾಲಕ್ಕೆ ಬರೀ ಬಂಜರು ನೆಲದಂತ್ತಿದ್ದ ಜಾಗವನ್ನು ಈಗ ಕಾಡಿನ ಮಾದರಿಯಾಗಿ ಪರಿವರ್ತಿಸಿರುವ 'ಆಶ್ರಮ' ದ ಪ್ರಯತ್ನಕ್ಕೆ ನಾವೂ ಸಹ ಕೈಜೋಡಿಸಿದ್ದೇವೆ.




ಜನವರಿ ತಿಂಗಳ ಪ್ರತಿ ಭಾನುವಾರವು ಬೆಳಿಗ್ಗೆ ೮.೩೦ ಗೆ ತಿಂಡಿ ಮುಗಿಸಿದ ನಂತರ

ಗಿಡಗಳಿಗೆ ನೀರೆರೆಯುವ ಕಾರ್ಯಕ್ಕೆ ಮುಂದಾಗುತ್ತಿದ್ದ ನಾವು ಗುಡ್ಡಗಳಲ್ಲಿ ಬೆಳೆದ ನೂರಾರು ವೈವಿದ್ಯಮಯ ಜಾತಿಯ ಸಸಿಗಳಿಗೆ ನೀರು ಹಾಕುತ್ತಿದ್ದೆವು. ಪ್ರತೀ ವಾರವು ೩೦-೪೦ ಯುವಕ ಯುವತಿಯರ ದಂಡೇ ನೆರೆದಿರುತ್ತಿತ್ತು. ಅಶ್ವತಪ್ಪ ಮತ್ತು ಶಂಕರಪ್ಪ ಇವರ ಮಾರ್ಗದರ್ಶನದಲ್ಲಿ ಶ್ರಮದಾನ ಕಾರ್ಯಕ್ರಮ ಯಶಸ್ವಿಯಾಗಿ ಪೂರ್ಣಗೊಳ್ಳುತ್ತಿತ್ತು.

ಸಾಯಕಾಲದವರೆಗೂ ಗಿಡಗಳಿಗೆ ನೀರು ಕುಡಿಸಿ ದಣಿದಿರುತ್ತಿದ್ದ ನಾವು ವಿಶ್ರಾಂತಿಗಾಗಿ ಒಂದೆಡೆ ಸೇರಿ ನಡೆದ ಕಾರ್ಯಕ್ರಮದ ಬಗ್ಗೆ ಚರ್ಚಿಸಿ ತಮ್ಮ ತಮ್ಮ ಅನುಭವಗಳನ್ನು ಹಂಚಿಕೊಳ್ಳುತ್ತಿದ್ದೆವು . ಹಾಗೇ ಈ ತರಹದ ಹಲವಾರು ಯೋಜನೆಗಳು ಬಗ್ಗೆ ಚಿಂತನೆ ಕೂಡ ನಡೆಸಿದ್ದೆವು . ಒಟ್ಟಿನಲ್ಲಿ ಈ ಶ್ರಮದಾನವು ಸಾಕಷ್ಟು ಹೊಸ ಅನುಭವದ ಜೊತೆಗೆ ಖುಷಿಯನ್ನು ತಂದಿದೆ. ಕೊನೆ ಭಾನುವಾರ ಗಣರಾಜ್ಯೋತ್ಸವ ಆಚರಿಸುವದರ ಜೊತೆ ' ಶ್ರಮದಾನ ' ಕಾರ್ಯಕ್ರಮವು ಯಶಸ್ವಿಯಾಗಿ ಪೂರ್ಣಗೊಂಡಿತು.

ಇಂದಿನ ಈ ಕಾರ್ಯಕ್ರಮದ ಮುಕ್ತಾಯ ಮುಂದೆ ಇನ್ನೊಂದು ಒಳ್ಳೆಯ ಕಾರ್ಯಕ್ಕೆ ಆರಂಭ ಎಂದು ಹೇಳುತ್ತ ಶ್ರಮದಾನದಲ್ಲಿ ಪಾಲ್ಗೊಂಡಿದ್ದ ಪ್ರತಿಯೊಬ್ಬರಿಗೂ ಅಭಿನಂದನೆಯನ್ನು ಸಲ್ಲಿಸುತ್ತ ಈ ಪರಿಸರ ಸ್ನೇಹ ಕೆಲಸಗಳಲ್ಲಿ ಹೆಚ್ಚೆಚ್ಚು ಜನರು ಭಾಗಿಯಾಗಿ ಪರಿಸರ ಬಳಸಿ ನಾವು ಉಳಿಯೋಣ ಎಂದು ಹೇಳುತ್ತ ಕೊನೆಗೆ 'ಕಾನನ' ತಂಡದ ಒಂದು ಒಳ್ಳೆಯ ಪ್ರಯತ್ನಕ್ಕೆ ಅಭಿನಂದನೆ ಸಲ್ಲಿಸುತ್ತಾ ಪರಿಸರದ ಜೊತೆ ಜನರ ಏಳ್ಗೆಯಾಗಲೆಂದು ಬಯಸುತ್ತೇವೆ .






**- ರಾಕೇಶ್ ಆರ್.ವಿ**

# ಜಗದ ಜಲ

ಜಗದ ಜಲವೆಲ್ಲ ಉಪ್ಪಾಗಿ
ಜನಗಳ ಜಗಳವೆಲ್ಲ ಉಪ್ಪಿಗಾಗಿ
ನಗರ ಜನರು ಜಾಸ್ತಿಯಾಗಿ



ತುಂಬಿ ತುಳುಕುತಿತ್ತು ಆಕಾಶದೆತ್ತರ
ಪಾರ್ಖೀಲು ಗೋಡೆಯಾಗಿ

ಕೆರೆಯೆಲ್ಲ ಸಮವಾಗಿ
ಕರಿಯ ಡಾಂಬಾರು ರೋಡಾಗಿ
ಸದ್ದಿಲ್ಲದೆಯೇ ಏರುತಿದೆ ಸಿಮೆಂಟು, ಮರಳಿಲ್ಲದೆ
ಬರೀ ಕಲ್ಲುಪುಡಿಯ ಗೋಡೆಯಾಗಿ

ಊರಗುಡ್ಡವೆಲ್ಲಾ ಖಾಲಿಯಾಗಿ
ಪಕ್ಕದ ಕಾಡೆಲ್ಲಾ ಬೋಳಾಗಿ
ಕಿಟಕಿ, ಬಾಗಿಲು, ಸೋಫಾ, ಮಂಚವಾಗಿ
ತಿಳಿದು,ತಿಳಿಯದೆಯೇ ಎಲ್ಲವನ್ನು
ಪಾರ್ಸಲ್ಲು ಮಾಡಿದ್ದೇವೆ ಪರರಿಗಾಗಿ

ಹರಿದ ನೀರೆಲ್ಲ ಕೆಸರಾಗಿ
ಡ್ಯಾಮು ನದಿಯೆಲ್ಲ ಹೂಳು ಹೆಪ್ಪಾಗಿ
ಮಳೆ ಇಲ್ಲದೆ ಜನರೆಲ್ಲಾ ಕಪ್ಪಾಗಿ
ಕೊನೆಗೆ ನೀರಿಲ್ಲದೆ ಬದುಕು ಬೆಪ್ಪಾಗಿ
ಜಗದ ಜನಕೆಲ್ಲಾ ವಾಕಳುಕೆಯು ಶುರುವಾಗಿದೆ ನೀರಿಲ್ಲದೆ.